# ಕಾನನ

ನಿಸರ್ಗದೆಡೆಗೆ ಪಯಣ



ಮುಖಪುಟ

ರಣಹದ್ದು

# ಅಕ್ಟೋಬರ್ 2019

## ಲೇಖನಗಳು





© ವಿಜಯ್ ಕುಮಾರ್ ಡಿ. ಎಸ್.


ವಿನ್ಯಾಸ

ಧನರಾಜ್ ಎಂ.

ಮುಖಪುಟ ಛಾಯಾಚಿತ್ರ

ಬಿ. ಶಶಿಕುಮಾರ್

ರಾಮನಗರ ಜಿಲ್ಲೆ.

ಪರಿಷ್ಕರಣೆ

ಮುರಳಿ ಎಸ್.

ಅನನ್ಯರೂಪ

ಕರಡು ತಿದ್ದುಪಡಿ

ಡಾ.ದೀಪಕ್ ಬಿ., ಮೈಸೂರು

# ಕಳ್ಳನಗಿಡ

**ಸಾಮಾನ್ಯ ಹೆಸರು : Purple Morning Glory**
**ವೈಜ್ಞಾನಿಕ ಹೆಸರು : *Argyeia Cuneata***



© ಡಬ್ಲೂ.ಸಿ.ಜಿ

ಕಳ್ಳನಗಿಡ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಪರ್ಪಲ್ ಮಾರ್ನಿಂಗ್ ಗ್ಲೋರಿ ಅಥವಾ ಕಳ್ಳನ ಗಿಡವು ಒಂದರಿಂದ ಎರಡು ಮೀಟರ್ ಎತ್ತರಕ್ಕೆ ಬೆಳೆಯಬಲ್ಲ ದೀರ್ಘಕಾಲಿಕ ಪೊದೆಸಸ್ಯವಾಗಿದೆ. ಇದರ ಮೃದುವಾದ ಕಾಂಡಗಳು ವೇಗವಾಗಿ ಬೆಳೆಯಬಲ್ಲವು. ಉದ್ದವಾದ ಅಥವಾ ಅಂಡಾಕಾರದ ಎಲೆಗಳು 3 ರಿಂದ 10 ಸೆಂಟಿಮೀಟರ್ ಇರುತ್ತದೆ. ಈ ಸಸ್ಯದ ಹೂ ಕೊಳವೆಯಾಕಾರದಲ್ಲಿದ್ದು, 5 ಸೆಂಟಿಮೀಟರ್ ಉದ್ದ ಹಾಗೂ ನೇರಳೆ ಬಣ್ಣದಿಂದ ಕೂಡಿದ್ದು ಸುಲಭವಾಗಿ ಗುರುತಿಸಬಹುದು. ಹೆಚ್ಚಾಗಿ ತೇವಾಂಶವುಳ್ಳ ಕಾಡುಗಳಲ್ಲಿ ಹಾಗೂ ಪೂರ್ವ ಮತ್ತು ಪಶ್ಚಿಮ ಘಟ್ಟಗಳಲ್ಲಿ ಕಂಡು ಬರುವ ಈ ಸಸ್ಯವು ವರ್ಷದ ಜುಲೈನಿಂದ ಸೆಪ್ಟೆಂಬರ್ ವರೆಗೆ ಹೂ ಬಿಡುತ್ತದೆ. ಕಡಿಮೆ ಸಮಯದಲ್ಲಿ ಬಹಳ ವೇಗವಾಗಿ ಬೆಳೆಯುವ ಕಳೆ ಗಿಡಗಳಲ್ಲಿ ಒಂದಾಗಿರುವ ಕಳ್ಳನ ಗಿಡವು ಒಂದು ಬಾರಿ ಹರಡಿದರೆ ನಿಯಂತ್ರಿಸುವುದು ಕಷ್ಟ. ಎಲ್ಲಾ ಮಾರ್ನಿಂಗ್ ಗ್ಲೋರಿ ಗಿಡಗಳು ಸಂಪೂರ್ಣ ಸೂರ್ಯನ ಬಿಸಿಲನ್ನು ಬಯಸುತ್ತವೆ. ಬೆಳಿಗ್ಗೆ ಅರಳಿದಾಗಿನಿಂದ ಕಣ್ಣಿಗೆ ಹಬ್ಬದಂತೆ ಕಾಣುವ ಹೂಗಳು ಸಂಜೆಯಾಗುತ್ತಲೆ ಮಂಕಾಗಿಬಿಡುತ್ತವೆ. ವಿಭಿನ್ನ ಹೂಗಳು, ಹಣ್ಣು

ಮತ್ತು ಎಲೆಯ ಗುಣಲಕ್ಷಣಗಳನ್ನು ಹೊಂದಿರುವ ಅನೇಕ ಕಳ್ಳಿನ ಗಿಡದ ತಳಿಗಳಿವೆ. ಆದರೆ ಎಲ್ಲಾ ಕಳ್ಳಿನಗಿಡಗಳು ಬಿಳಿ, ಕೆಂಪು, ನೀಲಿ, ನೇರಳೆ ಮತ್ತು ಹಳದಿ ಬಣ್ಣಗಳಲ್ಲಿ ವಿಶಿಷ್ಟವಾದ ಕೊಳವೆಯಾಕಾರದ ಹೂಗಳನ್ನು ಬಿಡುತ್ತವೆ.




# ಕಣ್ಮರೆಯಾದ ರಣಹದ್ದು?

ಪ್ರಕೃತಿಯಲ್ಲಿ ಎಲ್ಲಾ ಪ್ರಾಣಿಗಳ ಪಾತ್ರ ಬಹಳ ಪ್ರಮುಖವಾದದ್ದು. ಅದು ನೆಲದ ಮೇಲೆ ಕಂಡು ಬರುವ ಬೃಹತ್ ಆಕಾರದ ಆನೆಯಿರಬಹುದು, ಕಾನನದಲ್ಲಿ ಪುಟ್ಟ ಪುಟ್ಟ ರೆಕ್ಕೆಯನ್ನು ಬಡಿಯುತ್ತ ಹಾರಾಡುವ ಚಿಟ್ಟೆಗಳಿರಬಹುದು ಅಥವಾ ನೀರಿನಲ್ಲಿ ಕಂಡು ಬರುವ ಏಕಕೋಶ ಜೀವಿಯಾದ ಅಮೀಬಾ ಇರಬಹುದು. ಯಾವುದೇ ಜೀವಿಯನ್ನು ನೋಡಿದರೂ ಈ ಪರಿಸರದಲ್ಲಿ ಅದರದ್ದೇ ಆದ ಕೊಡುಗೆ ಇದೆ. ಆದರೆ ಮನುಷ್ಯರಾಗಿ ಈ ಪ್ರಕೃತಿಗೆ ನಮ್ಮ ಕೊಡುಗೆ ಏನು? ಒಮ್ಮೆ ಯೋಚಿಸಿ. ಹಾಳುಮಾಡುವುದೇ ಪರಿಸರಕ್ಕೆ ಉಡುಗೊರೆಯಾಗಿದೆ ಅನಿಸುತ್ತದೆ, ಯಾಕೆಂದರೆ ಅವನು ಬುದ್ಧಿವಂತ ಪ್ರಾಣಿ.

ಪೂರ್ಣಚಂದ್ರ ತೇಜಸ್ವಿಯವರು ಒಂದು ಮಾತು ಹೇಳುತ್ತಾರೆ “ಪ್ರಕೃತಿ ನಮ್ಮ ಬದುಕಿನ ಭಾಗವಲ್ಲ, ನಾವು ಪ್ರಕೃತಿಯ ಒಂದು ಭಾಗ” ಎಂದು. ಬೇರೆ ಜೀವಿಗಳಿಂದ ಈ ಪ್ರಕೃತಿಯಲ್ಲಿ ತುಂಬ ಉಪಯೋಗವಿದೆ. ಜೊತೆಗೆ ಜೀವಸಂಕುಲಕ್ಕೆ ಬಹಳ ಅನುಕೂಲಕರವಾಗಿದೆ ಮತ್ತು ಪರಿಸರದ ಸಮತೋಲನ ಕಾಪಾಡುವಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಇದರಲ್ಲಿ ಪಕ್ಷಿಗಳನ್ನು ಮಾತ್ರ ತೆಗೆದುಕೊಂಡರೂ ಸಹ ಅವುಗಳ ಪಾತ್ರ ದೊಡ್ಡದು. ಪಕ್ಷಿಗಳಲ್ಲಿ ಬರೀ ಮಾಂಸಾಹಾರಿ ಪಕ್ಷಿಗಳನ್ನು ಮಾತ್ರ ನೋಡುವುದಾದರೆ, ಇವು ಸತ್ತ ಪಕ್ಷಿ ಪ್ರಾಣಿಗಳನ್ನು ತಿಂದು ನೈಸರ್ಗಿಕ ತೋಟಿಯಂತೆ ಬದುಕುತ್ತವೆ. ಇವು ವಾತಾವರಣವನ್ನು ಶುಭ್ರವಾಗಿರುವಂತೆ ನೋಡಿಕೊಳ್ಳುತ್ತವೆ. ಇವುಗಳ ಪಟ್ಟಿಯಲ್ಲಿ ಗರುಡ, ಚೊಟ್ಟಿ ಗರುಡ, ಜೌಗು ಸೆಳೆವ, ಡೇಗೆ, ಮೀನು ಗಿಡುಗ, ರಾಮದಾಸ ಹಕ್ಕಿ, ವೈನತೇಯ, ಹಾವು ಗಿಡುಗ, ಗೂಬೆ, ಹದ್ದು ಮತ್ತು ವಿಶೇಷವಾಗಿ ರಣಹದ್ದುಗಳು ಸೇರಿವೆ.

1980 ರ ದಶಕದಲ್ಲಿ ವಿಶ್ವದಲ್ಲಿಯೇ ಅತೀ ಹೆಚ್ಚು ರಣಹದ್ದುಗಳು ಭಾರತದಲ್ಲಿ ಕಂಡು ಬರುತ್ತಿದ್ದವು. ಆಗ ಸಾವಿರಾರು ರಣಹದ್ದುಗಳು ಆಕಾಶದಲ್ಲಿ ಲೀಲಾಜಾಲವಾಗಿ ಹಾರಾಡುತ್ತಿದ್ದವು. ನಮ್ಮಲ್ಲಿ ಬಿಯರ್ಡೆಡ್ ವಲ್ಚರ್ (Bearded vulture), ಈಜಿಪ್ಷಿಯನ್ ವಲ್ಚರ್ (egyptian vulture), ಸ್ಲೆಂಡರ್ ಬಿಲ್ಡ್ ವಲ್ಚರ್ (Slender billed vulture), ಸಿನರಸ್ ವಲ್ಚರ್ (cinereous vulture), ಕಿಂಗ್ ವಲ್ಚರ್ (King Vulture) ಯುರೇಷಿಯನ್ ವಲ್ಚರ್ (Eurasian Vulture) ಲಾಂಗ್ ಬಿಲ್ಡ್ ವಲ್ಚರ್ (Long Billed Vulture), ಹಿಮಾಲಯನ್ ಗ್ರಿಫನ್

ವಲ್ಚರ್ (Himalayan Griffon Vulture) ಮತ್ತು ವೈಟ್ ಬ್ಯಾಕ್ಡ್ ವಲ್ಚರ್ (White backed vulture) ಎಂಬ ಒಂಭತ್ತು ಪ್ರಭೇದದ ರಣಹದ್ದುಗಳನ್ನು ಕಾಣಬಹುದು.




ಸಾಮಾನ್ಯವಾಗಿ ಎಲ್ಲರಿಗೂ ರಣಹದ್ದುಗಳ ಪರಿಚಯ ಇದೆ. ರಣಹದ್ದುಗಳು ಪ್ರಕೃತಿಯಲ್ಲಿ ಪ್ರಮುಖ ಕರ್ತವ್ಯವನ್ನು ನಿರ್ವಹಿಸುತ್ತವೆ. ಹಿಂದೆ ಯಾರ ಮನೆಗಳಲ್ಲಾದರು ದನ-ಕರು, ಮೇಕೆ-ಕುರಿಗಳು ಮೃತಪಟ್ಟರೆ ಅವುಗಳ ಚರ್ಮಸುಲಿದು ಊರಿನಿಂದಾಚೆ ತೆಗೆದುಕೊಂಡು ಹೋಗಿ ಹಾಕಿ ಬರುತ್ತಿದ್ದರು. ಪಾರ್ಸಿ ಜನಾಂಗದವರು, ತಮ್ಮಲ್ಲಿ ಸತ್ತುಹೋದವರನ್ನು ಮಣ್ಣಿನಲ್ಲಿ ಹೂತು ಹಾಕದೇ ಅಥವಾ ಬೆಂಕಿಯಲ್ಲಿ ಸುಡದೆ ದೇಹವನ್ನು ದೇವರಿಗೆ ಅರ್ಪಿಸಬೇಕೆಂದು ತೆರೆದಿರುವ ಜಾಗದಲ್ಲಿ ಇಡುತ್ತಿದ್ದರು, ಅಷ್ಟು ದೂರವೇಕೆ ಇಲ್ಲೇ ನಮ್ಮ ಬೆಂಗಳೂರಿನ ಸುತ್ತಮುತ್ತಲಿರುವ ಕಾಡುಗಳ ಅಂಚಿನಲ್ಲಿ ವಾಸಿಸುವ ಕಾಡು ಪೂಜರ ಜನಾಂಗದವರು ಸುಮಾರು ಎಪ್ಪತ್ತು-ಎಂಬತ್ತು ವರ್ಷಗಳ ಹಿಂದೆ ಯಾರಾದರು ಸತ್ತರೆ ಹೆಣಗಳನ್ನು ಮಣ್ಣು ಮಾಡದೆ ಅಥವಾ ಸುಡದೆ ಕಾಡಿನ ಕಲ್ಲು ಗುಡ್ಡಗಳ ಮೇಲೆ ಕಲ್ಲಿನಿಂದ ಕಟ್ಟಿದ ಚಾವಣಿಯ ಕೆಳಗೆ ಇರಿಸಿ, ಒಂದು ಮಣ್ಣಿನ ಗಡಿಗೆಯಲ್ಲಿ ಕುಡಿಯಲು ನೀರಿಟ್ಟು ಪ್ರಾಣಿ-ಪಕ್ಷಿಗಳು ತಿಂದು-ಕುಡಿದುಹೋಗಲಿ ಎಂದು ಬರುತ್ತಿದ್ದರು. ಮೃತದೇಹಕ್ಕೋಸ್ಕರವೇ ಕಾಯ್ದು ಕುಳಿತುಕೊಂಡಿರುವ ರಣಹದ್ದುಗಳು ಅವುಗಳನ್ನು ಕಂಡ ಕ್ಷಣವೇ ಗುಂಪಿನಲ್ಲಿ ಬಂದು, ಮೃತ ದೇಹವನ್ನು ತಿಂದು ಖಾಲಿಮಾಡುತ್ತಿದ್ದವು. ಹದ್ದುಗಳು ಸತ್ತ ಪ್ರಾಣಿಯ ದೇಹವನ್ನು ತಿನ್ನುವುದರಿಂದ, ಸತ್ತಪ್ರಾಣಿಗಳಿಂದ ಹೊರಬರುವ ದುರ್ವಾಸನೆ, ಅದರಿಂದ ಹಬ್ಬುವ ರೋಗಗಳು, ನೀರು ಕಲುಷಿತಗೊಳ್ಳುವುದು ತಪ್ಪಿ ಸುತ್ತ ಮುತ್ತಲಿನ ಪರಿಸರ ಸ್ವಚ್ಛವಾಗಿರುತ್ತದೆ. ಆದ್ದರಿಂದ ಪರಿಸರ ಸ್ವಚ್ಚತೆಯನ್ನು ಕಾಪಾಡುವುದರಲ್ಲಿ ರಣಹದ್ದುಗಳದ್ದೇ ಮೇಲುಗೈ. ಈಗ ನಮಗೆ ರಣಹದ್ದುಗಳ ಪ್ರಾಮುಖ್ಯತೆ ಎಷ್ಟಿದೆ ಎಂದು ತಿಳಿಯಿತು. ಅವುಗಳ ಸಂತತಿಯು ನಶಿಸುತ್ತಿದೆ. ಕಾರಣ ಏನು ಎಂಬುದು ಬಹುದೊಡ್ಡ ಪ್ರಶ್ನೆ .

ಇದರ ಬಗ್ಗೆ ಹಲವಾರು ಸಂಶೋಧನೆಗಳು ನಡೆದಿವೆ, ನಡೆಯುತ್ತಲೂ ಇವೆ. ಒಂದು ಕಡೆ ಮನುಷ್ಯನ ಅಗತ್ಯಗಳನ್ನು ಪೂರೈಸಲು ನಗರಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. ಅಭಿವೃದ್ಧಿಯಿಂದ ನೇರ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಅತಿಯಾದ ಒತ್ತಡ ಬೀರುತ್ತಿದೆ. ಅರಣ್ಯಗಳ ನಾಶ, ಗಣಿಗಾರಿಕೆಯಂತಹ ಚಟುವಟಿಕೆಯಿಂದ ಇವುಗಳ ಆವಾಸ ನಷ್ಟವಾಗುತ್ತಿದೆ. ಮೊತ್ತೊಂದು ಕಡೆ ಅವುಗಳ ಆಹಾರದ ಕೊರತೆ, ಮೊದಲು ಭಾರತದಲ್ಲಿ ರಣಹದ್ದುಗಳಿಗೆ ಆಹಾರದ ಸಮಸ್ಯೆ ಇರಲಿಲ್ಲ. ಕೃಷಿಕರ ಎಲ್ಲ ಮನೆಗಳಲ್ಲೂ ದನ-ಕರುಗಳು ಇದ್ದೆ ಇರುತ್ತಿದ್ದವು. ಆಗ ಭಾರತ ವಿಶ್ವದಲ್ಲಿಯೇ ಜಾನುವಾರುಗಳ ಸಾಕಾಣೆಯಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುತ್ತಿತ್ತು. ಆದರೆ ಬರಬರುತ್ತಾ ಈ ಜಾನುವಾರುಗಳನ್ನು ಮಾಂಸಕ್ಕಾಗಿ ವಿದೇಶಗಳಿಗೆ ರಪ್ತುಮಾಡುವುದು ಆರಂಭವಾಯಿತು. ಹಾಗಾಗಿ ರಣಹದ್ದುಗಳ

ಆಹಾರದ ಒಂದು ದೊಡ್ಡಪಾಲು ಇಲ್ಲವಾಯಿತು. 1973 ರಲ್ಲಿ ಡೈಕ್ಲೋಫಿನಾಕ್ ಸೋಡಿಯಂ ಎಂಬ ಔಷಧಿ ಕಂಡುಹಿಡಿದ ಬಳಿಕ, ಜಾನುವಾರುಗಳಿಗೆ ಬರುತ್ತಿದ್ದ ಉರಿಯೂತದ ಅಸ್ವಸ್ಥತೆಗಳು, ಮಸ್ಕ್ಯುಲೋಸ್ಕೆಲಿಟಲ್, ವಿಶೇಷವಾಗಿ ಸಂಧಿವಾತ, ಪಾಲಿಮಿಯೊಸಿಟಿಸ್, ಡರ್ಮಟೊಮಿಯೊಸಿಟಿಸ್, ಅಸ್ಥಿಸಂಧಿವಾತ, ಆಂಕೈಲೋಸಿಂಗ್ ಸ್ಪಾಂಡಿಲೈಟಿಸ್ ಮತ್ತು ಮುಖ್ಯವಾಗಿ ನೋವಿನಿಂದ ನರಳುವ ಜಾನುವಾರುಗಳನ್ನು ಕಾಪಾಡಿಕೊಳ್ಳಲು ರೈತರು ಪಶುವೈದ್ಯರ ಮೊರೆಹೋಗುತ್ತಿದ್ದರು. ಪಶುವೈದ್ಯರು ನೋವು ಕಡಿಮೆಯಾಗಲಿ ಎಂದು ಡೈಕ್ಲೋಫಿನಾಕ್ ಸೋಡಿಯಂ ರಾಸಾಯನಿಕವನ್ನು ಕೊಡುತ್ತಿದ್ದರು. ಈ ಔಷಧಿ ಕೊಟ್ಟ ತಕ್ಷಣವೇ ಎತ್ತುಗಳು ನೆಲದಲ್ಲಿ ಹೊರಳಾಡಿ ಸ್ವಲ್ಪ ಸಮಯದ ನಂತರ ಚೇತರಿಸಿಕೊಳ್ಳುತ್ತವೆ. ಈ ಡೈಕ್ಲೋಫಿನಾಕ್ ಸೋಡಿಯಂ ಪ್ರಾಣಿಗಳ ದೇಹದಲ್ಲಿ ಸ್ವಲ್ಪ ದಿನಗಳ ಕಾಲ ಹಾಗೇ ಇರುತ್ತದೆ. ಜಾನವಾರುಗಳು ಏನಾದರು ತಕ್ಷಣ ಮರಣ ಹೊಂದಿದರೆ. ಅವುಗಳನ್ನು ರೈತರು ಊರಿನಿಂದಾಚೆ ಎಸೆದು ಬರುವ ಸಂಪ್ರದಾಯ ನಮ್ಮಲ್ಲಿ ಮೊದಲಿಂದಲೂ ಇದೆ, ಈಗಲೂ ಎಸೆದು ಬರುತ್ತಾರೆ. ಎಸೆದ ಜಾನುವಾರುಗಳ ಕಳೇಬರವನ್ನು ತಿನ್ನಲು ಬರುವ ರಣಹದ್ದುಗಳು ಡೈಕ್ಲೋಫಿನಾಕ್ ಸೋಡಿಯಂ ಒಳಗೊಂಡಿರುವ ಮಾಂಸವನ್ನು ತಿನ್ನುತ್ತವೆ. ಡೈಕ್ಲೋಫಿನಾಕ್ ಸೋಡಿಯಂ ರಣಹದ್ದುಗಳ ದೇಹಕ್ಕೆ ಸೇರಿದ ತಕ್ಷಣವೇ ದೇಹದಲ್ಲಿ ಹೆಚ್ಚಿನ ಅಂಶದಲ್ಲಿ ಲವಣಗಳು ಶೇಕರಣೆಯಾಗುವ ರೀತಿ ಮಾಡುತ್ತದೆ. ಇದನ್ನು ಶುದ್ಧಿಗೊಳಿಸಲು ಆಗದೆ ಕಿಡ್ನಿ ವೈಫಲ್ಯದಿಂದ ರಣಹದ್ದುಗಳು ಸಾಯುತ್ತವೆ. ಇದರ ಪರಿಣಾಮವನ್ನು ಅರಿತ ಕರ್ನಾಟಕ ಸರ್ಕಾರ ಡೈಕ್ಲೋಫಿನಾಕ್ ಸೋಡಿಯಂ ನಂತಹ ಔಷಧಿಯನ್ನು ರದ್ದುಗೊಳಿಸಿತು.

ರಣಹದ್ದುಗಳ ಸಂಖ್ಯೆಯ ಮೇಲೆ ಪರಿಣಾಮ ಬೀರುವ ಇನ್ನೊಂದು ಅಂಶವೆಂದರೆ, ಕಾಡಂಚಿನ ಗ್ರಾಮಗಳಲ್ಲಿ ಪಶುಸಾಗಾಟಣೆ ಮಾಡುತ್ತಾರೆ, ಬೆಳಗ್ಗಿನ ಸಮಯ ಎಲ್ಲ ಹಸುಗಳನ್ನು ಮೇಯಲು ಕಾಡಿಗಟ್ಟುತ್ತಾರೆ. ರಾತ್ರಿ ಹಿಂತಿರುಗಿದಾಗ ಒಂದೆರೆಡು ಹಸುಗಳು ಕಮ್ಮಿಯಾಗಿದ್ದರೆ, ಗ್ರಾಮಸ್ಥರು ಅವುಗಳನ್ನು ಹುಡುಕಿಕೊಂಡು ಹೋಗುತ್ತಾರೆ. ಅಂಥ ಜಾನುವಾರುಗಳೇನಾದರೂ ಬೇಟೆಗೀಡಾಗಿ, ಅದರ ಮಾಂಸವೇನಾದರೂ ಇನ್ನೂ ಉಳಿದುಕೊಂಡಿದ್ದರೆ, ಉಳಿದ ಮಾಂಸಕ್ಕೆ ವಿಷ ಹಾಕಿ ಬರುತ್ತಾರೆ. ಇದರಿಂದ ಮಾಂಸಾಹಾರಿ ಪ್ರಾಣಿಗಳು, ನರಿಗಳು, ರಣಹದ್ದುಗಳು ಎಲ್ಲವೂ ಬಲಿಯಾಗುತ್ತವೆ. ಹೀಗಾಗಿ ರಣಹದ್ದುಗಳ ಸಂತತಿಯೇ ಅಳಿವಿನಂಚಿಗೆ ತಲುಪಿದೆ.

ಆದರೆ ಈಗ ರಣಹದ್ದುಗಳಿಗೆ ಆಹಾರದ ಕೊರತೆಯೂ ಎದುರಾಗಿದೆ. ರಣಹದ್ದುಗಳು ಬೇಟೆಯಾಡುತ್ತವೆ ಎಂಬ ತಪ್ಪು ಕಲ್ಪನೆ ಜನರ ಮನಸ್ಸಿನಲ್ಲಿದೆ. ಭಾರತದಲ್ಲಿ ಕಂಡುಬರುವ ರಣಹದ್ದುಗಳು ಬೇಟೆಯಾಡುವುದಿಲ್ಲ, ಹಾಗೂ



ಅವುಗಳಿಗೆ ತಿನ್ನಲು ಮೃತದೇಹಗಳು ಸಾಕಷ್ಟು ಸಿಗುತ್ತಿಲ್ಲ. ಹಾಗಾಗಿ ಎಲ್ಲ ರೀತಿಯಿಂದಲೂ ಆಹಾರದ ಕೊರತೆ ಎದುರಾಗಿರುವುದರಿಂದ ರಣಹದ್ದುಗಳ ಸಂಖ್ಯೆ ಕ್ಷೀಣಿಸುತ್ತಿವೆ. ಚಾರ್ಲೆಸ್ ಡಾರ್ವಿನ್ ಸಿದ್ಧಾಂತದ ಪ್ರಕಾರ 'Nature always select the fittest' ಅನ್ನುವ ಹಾಗೆ ರಣಹದ್ದುಗಳಿಗೆ ಈ ತರಹದ ಪರಿಸರದಲ್ಲಿ ಬದುಕಲು ತುಂಬಾ ಕಷ್ಟವಾಗುತ್ತಿದೆ. ಇದರಿಂದ ಕೂಡ ಅವನತಿಯನ್ನು ಹೊಂದುತ್ತಿವೆ. ಪರಿಸರದಲ್ಲಿ ಒಂದು ಚಿಕ್ಕ ಏರು-ಪೇರಾದರು ಅದರ ಪರಿಣಾಮದಿಂದ ಜೀವಿಗಳ ನಾಶವಾಗುತ್ತವೆ. ಮನುಷ್ಯ ಅತೀ ಬುದ್ಧಿವಂತನಾದಷ್ಟು ಪ್ರಕೃತಿಗೆ ಅದು ಶಾಪವಾಗುತ್ತದೆ.

© ಬಿ. ಶಿವಕುಮಾರ್

-ಅಶ್ವಿನಿ ಏಸ್.

ಬೆಂಗಳೂರು.



ಬಿ. ಶಶಿಕುಮಾರ್

# ವನ್ಯ ಜೀವಿಗಳ ಸರ್ವನಾಶ

ಮಾನವರಾದ ನಾವು ವ್ಯವಸಾಯಕ್ಕಾಗಿ ಕಾಡನ್ನು ಕಡಿದು ಬೆಂಕಿ ಹಚ್ಚಿ ಬಳಸುತ್ತಿರುವುದರ ನೇರ ಪರಿಣಾಮವೇ ವನ್ಯಮೃಗಗಳ ಮಾರಣಹೋಮ. 2026 ರ ವೇಳೆಗೆ ಭೂಮಿಯ ಮೇಲೆ ಇರುವ ಎಲ್ಲಾ ಕಶೇರುಕಗಳು ಅಂದರೆ ಸಸ್ತನಿಗಳು, ಪಕ್ಷಿಗಳು, ಮೀನುಗಳು, ಉಭಯವಾಸಿಗಳು, ಸರಿಸೃಪಗಳೆಲ್ಲಾ ಸಂಪೂರ್ಣವಾಗಿ ನಿರ್ವಂಶವಾಗಿ ಹೋಗುತ್ತವೆ. ಆಗ ಪ್ರಾಣಿಗಳು ಉಳಿಯುವುದು ಸಂರಕ್ಷಿತ ಪ್ರದೇಶಗಳಲ್ಲಿ, ಪ್ರಾಣಿ ಸಂಗ್ರಹಾಲಯದಲ್ಲಿ ಹಾಗೂ ಸಾಕಿಕೊಂಡಿರುವ ಜೀವಿಗಳು ಮಾತ್ರ.

ಈ ಜೀವಿಗಳೆಲ್ಲಾ ಒಮ್ಮೆಲೆ ಇಲ್ಲವಾಗುತ್ತಿರುವುದಕ್ಕೆ ಕಾರಣವೇನು ಗೊತ್ತೆ?

ಇತ್ತೀಚಿಗೆ ಪ್ರಕಟವಾದ ವೈಜ್ಞಾನಿಕ ವರದಿಯ ಪ್ರಕಾರ ಭೂಮಿಯ ಮೇಲೆ ಜೀವಿಸುತ್ತಿರುವ ಒಟ್ಟು ಜೀವರಾಶಿಯಲ್ಲಿ ನಾವು ಸಾಕಿಕೊಂಡಿರುವ ಸಾಕುಪ್ರಾಣಿಗಳಾದ ಹಸು- ಹಂದಿಗಳ ಸಂಖ್ಯೆಯೇ ಹೆಚ್ಚಿದೆ. ಹಾಗೆಯೇ ನಾವು ಸಾಕಿರುವ ಕೋಳಿಗಳ ಒಟ್ಟು ತೂಕವು ಇಡೀ ವಿಶ್ವದಲ್ಲಿರುವ ಎಲ್ಲಾ ಪಕ್ಷಿಗಳ ಒಟ್ಟು ತೂಕಕ್ಕಿಂತ 5 ಪಟ್ಟು ಹೆಚ್ಚಿದೆ.

ಭೂಮಿಯ ಮೇಲಿರುವ ಒಟ್ಟು ಜೀವರಾಶಿಯಲ್ಲಿ 60 % ಸಸ್ತನಿಗಳನ್ನು ಹಾಗು 70% ಪಕ್ಷಿಗಳನ್ನು ನಾವು ನಮ್ಮ ಆಹಾರಕ್ಕಾಗಿಯೇ ಸಾಕುತ್ತಿದ್ದೇವೆ. ಇದರಿಂದ ವನ್ಯಜೀವಿಗಳ ಆಹಾರದ ಮೇಲೆ ಮಾನವನು ಉಂಟು ಮಾಡುತ್ತಿರುವ ಒತ್ತಡವನ್ನು ನಾವು



ಕಾಣಬಹುದು. ಮಾನವರಾದ ನಾವು ಹಾಲಿಗಾಗಿ, ಮಾಂಸಕ್ಕಾಗಿ ಸಾಕುತ್ತಿರುವ ಹಸು, ಕುರಿ, ಹಂದಿಗಳಿಂದ ಮತ್ತು ಹೆಚ್ಚು ಹೆಚ್ಚು ತಿನ್ನುವ ಬಾಯಿಗಳಿಗೆ ಊಟ ಹೊಂದಿಸಲು ವಿಸ್ತಾರಗೊಳ್ಳುತ್ತಿರುವ ವ್ಯವಸಾಯ ಭೂಮಿಯ ದೆಸೆಯಿಂದ, ವನ್ಯ ಸಸ್ತನಿಗಳ ಸಂಖ್ಯೆ ವಿಪರೀತ ಕುಸಿದಿದೆ. 1970 ರಿಂದ 2010ರವರೆಗೆ ಭೂಮಿಯ ಮೇಲಿನ ಜೀವ ವೈವಿಧ್ಯತೆಯಲ್ಲಿ 52% ಕುಸಿತವಾಗಿದೆ. ಬರೀ ಕಶೇರುಕಗಳ ಸಂಖ್ಯೆಯಲ್ಲೇ 58% ಕುಸಿತವಾಗಿದೆ. ಇದೆ ಮಾಹಿತಿಯ ಆಧಾರದ ಮೇಲೆ ಗ್ರಾಫ್ ಹಾಕಿ ಈ ಕುಸಿತ ಹೀಗೇ ಮುಂದುವರಿದರೆ 2026ರ ವೇಳೆಗೆ ಭೂಮಿಯ ಮೇಲೆ ಇರುವ ಎಲ್ಲಾ ಕಶೇರುಕಗಳು ನಿರ್ವಂಶವಾಗಿ ಹೋಗುತ್ತವೆ ಎಂದು ವಿಜ್ಞಾನಿಗಳು ಲೆಕ್ಕಹಾಕಿದ್ದಾರೆ. ಈ ಲೆಕ್ಕದಲ್ಲಿ ಮಾನವರಾದ ನಾವು ಸೇರಿದ್ದೇವೆ ಎಂಬುದನ್ನು ಮರೆಯುವಂತಿಲ್ಲ! ವನ್ಯ ಕಶೇರುಕಗಳ ಸಂಖ್ಯೆಯಲ್ಲಿ ಉಂಟಾಗುತ್ತಿರುವ ಕುಸಿತಕ್ಕೆ ನೇರ ಕಾರಣ ಅವು ವಾಸಿಸುತ್ತಿರುವ ಆವಾಸದ ನಾಶ ಮತ್ತು ಕಳ್ಳಬೇಟೆ. ನಾವು ಹಸು ಕುರಿಗಳನ್ನು ಸಾಕಲು ಮತ್ತು ವ್ಯವಸಾಯಕ್ಕಾಗಿ ಇದ್ದಬದ್ದ ಕಾಡನ್ನು ಕಡಿದು ಹೊಲ ತೋಟಗಳಾಗಿಸಿ ಬಳಸುತ್ತಿದ್ದೇವೆ.



ಕಾಲ ಮಿಂಚುವ ಮೊದಲು ಹೆಚ್ಚೆಚ್ಚು ಪ್ರದೇಶಗಳಲ್ಲಿ ಗಿಡನೆಟ್ಟು ಕಾಡನ್ನಾಗಿಸಿದರೆ ಈ ಮಹಾ ದುರಂತವನ್ನು ತಪ್ಪಿಸಬಹುದು. ನಾವು ತಿನ್ನುವ 80% ಊಟ ಈಗಾಗಲೇ ಸಸ್ಯಗಳಿಂದ ಬರುತ್ತಿದೆ. ಈ ತೊಂದರೆ ನಮ್ಮ ಬುಡಕ್ಕೆ ಬರುವ ಮೊದಲೇ ಹೆಚ್ಚು ಹೆಚ್ಚು ಗಿಡ ನೆಟ್ಟು, ಪ್ರಜ್ಞಾಪೂರ್ವಕವಾಗಿ ಮಾನವನ ಜನಸಂಖ್ಯೆಯನ್ನು ನಿಯಂತ್ರಿಸಿ, ಎಲ್ಲರೂ ಶಾಖಾಹಾರಿಗಳಾದರೆ, ಮೇಲೆ ತಿಳಿಸಿದ ಕಶೇರುಕಗಳ, ವನ್ಯಜೀವಿಗಳ, ಮಾನವರ ಅವನತಿಯನ್ನು ತಡೆಯಬಹುದು ಎಂದು ವಿಜ್ಞಾನಿಗಳು ಹೇಳುತ್ತಾರೆ.









ವಿ.ವಿ.ಅಂಕಣ

# ಸಸ್ಯಹಾರಿ ಮೊಸಳೆಗಳು

ಹಳ್ಳೀ... ಚಂದಾ... ಕಾಣೋ...ತಮ್ಮಾ!

ಹಳ್ಳೀ... ಜನಾ ಆ...ಚಂದಾ ಕಾಣೊ ತಮ್ಮ, ಬಲು ಅಂದಾ ಕಾಣೋ ತಮ್ಮ!

ಅನ್ನೋ ಸುಂದರ ಜನಪದ ಗೀತೆಯ ಸಾಲುಗಳು ನನ್ನ ತಲೆಯಲ್ಲಿ ಆಗಾಗ ಬಂದು ಹಾಜರಾತಿ ಹಾಕಿ ಹೋಗುತ್ತಿರುತ್ತವೆ. ಹಾಗೆ ನಮ್ಮ ಹಳ್ಳಿ ಜೀವನದ ಹೆಮ್ಮೆಯ ಸಂಗತಿಗಳ ಮೆಲುಕು ಹಾಕಲು ಎಡೆ ಮಾಡಿಕೊಡುತ್ತವೆ. ಹಳ್ಳಿಯ ಮನೆಯೆಂದರೆ ಮನೆಗೊಂದು ಆಕಳು ಇರುವುದು ಸರ್ವೇ ಸಾಮಾನ್ಯ. ನಮ್ಮ ಮನೆಯಲ್ಲಿಯೂ ಸಹ 2-3 ಹಸುಗಳ ಕೊಟ್ಟಿಗೆ ಇದ್ದಿತು. ಹಸುವಿಗೆ ಕರು ಆಯಿತೆಂದರೆ ಚಿಕ್ಕವಯಸ್ಸಿನಲ್ಲಿ ನಮಗೆ ಎಲ್ಲಿಲ್ಲದ ಆನಂದ, ಬಹುಶಃ ಕರುವಿನ ತಾಯಿಗೆ ಆಗುವಷ್ಟೇ ಖುಷಿ ನಮಗೂ ಆಗುತ್ತಿತ್ತು. ಆದ್ದರಿಂದಲೇ ಏನೋ, ಬೆಳಿಗ್ಗೆ ಎದ್ದ ತಕ್ಷಣ ನಮ್ಮ ಮೊದಲ ಕೆಲಸ ಕುಟುಂಬದ ಆ ಹೊಸ ಸದಸ್ಯನನ್ನು ನೋಡುವುದೇ ಆಗಿತ್ತು. ಏಕೆಂದರೆ ಹಳ್ಳಿಯ ಎಷ್ಟೋ ಮನೆಗಳಲ್ಲಿ ಮಕ್ಕಳಿಗೆ ಹೇಳಿಕೊಡುವುದೇನೆಂದರೆ ಏಳುವಾಗಲೇ ಬಲಗಡೆಗೆ ಎದ್ದು, ಎದ್ದ ತಕ್ಷಣ ದೇವರ ಮುಖವೋ, ಹಸುವಿನ ಮುಖವೋ ನೋಡಿ ಎಂದು. ಎಂಥಾ ಒಳ್ಳೆಯ ಯೋಚನೆಯಲ್ಲವೇ, ಎದ್ದ ತಕ್ಷಣ ಮುಖದಲ್ಲಿ ಆ ನಗು ಮೂಡಿದರೆ ಸಾಕು. ಆ ದಿನವೆಲ್ಲಾ ಸುಂದರವಾಗಿ ಕಾಣದೇ ಇದ್ದೀತೆ. ಹೀಗೆ ಕೆಲವು ದಿನಗಳು ಕಳೆಯುತ್ತಿದ್ದಂತೆ ಕರು ಬೆಳೆಯುತ್ತದೆ, ತಾಯಿ ಹಾಲಿನಿಂದ ಹುಲ್ಲು ಸೊಪ್ಪಿನ ಕಡೆಗೆ ಅದರ ಆಹಾರ ಪದ್ಧತಿ ವಾಲುತ್ತದೆ. ಆಗ ನಿಜವಾದ ಮಜಾ. ಹೇಗೆನ್ನುವಿರಾ ಇಲ್ಲಿ ಕೇಳಿ, ನನಗಿನ್ನೂ ನೆನಪಿದೆ ಆ ಕರುವಿಗೆಂದೇ ಕುಡುಗೋಲು ಹಿಡಿದು ಆರಿಸಿ ಆರಿಸಿ ತಂದ ಹುಲ್ಲು, ಜೋಳದ ಕಡ್ಡಿಗಳನ್ನು ನಾವೇ ಖುದ್ದಾಗಿ ಕರುವಿಗೆ ತಿನ್ನಿಸುತ್ತಿದ್ದ ಆ ಕ್ಷಣಗಳು.... ನೆನೆಸಿಕೊಂಡರೆ ಸಾಕು ಮಂದಹಾಸ

ಮುಖವೆಲ್ಲಾ ಆವರಿಸುತ್ತದೆ. ಕಡ್ಡಿ ಹಿಡಿದು ತಿನ್ನಿಸುತ್ತಾ ಹೋದಂತೆ ನಮ್ಮ ಕೈ ಬೆರಳುಗಳು ಕರುವಿನ ಬಾಯಿಯ ಒಳ ಹೋದಾಗ ಆ ಎಳೆ ಚಪ್ಪಟೆ ಹಲ್ಲುಗಳ, ಒರಟು ನಾಲಿಗೆಯಿಂದ ಆಗುವ ಕಚಗುಳಿಯ ಮಾತಿನಲ್ಲಿ ಹೇಳಲಾಗದು. ಅಂತಹುದನ್ನು ಅನುಭವಿಸಿಯೇ ತೀರಬೇಕು.



ಹೀಗೆ ಜೀವನಶೈಲಿಯಲ್ಲಿ ಇರುವ ಹಳ್ಳಿಗನಿಗೆ ವಿಜ್ಞಾನದ ಸಂಶೋಧನೆಯೊಂದು ಈ ಹಸುಗಳು ಹಿಂದಿನ ಕಾಲದಲ್ಲಿ ಮಾಂಸಾಹಾರಿಗಳಾಗಿದ್ದವು, ಎಂದರೆ ನಂಬಲಾದೀತೆ? ನೀವೆ ಹೇಳಿ?

ನಂಬಬೇಡಿ ಏಕೆಂದರೆ ಅದು ಸತ್ಯವೂ ಅಲ್ಲ. ನಾ ಹೇಳಲು ಹೊರಟಿರುವುದು ಬೇರೆ. ನಮಗೆ ತಿಳಿದಿರುವ ಹಾಗೆ ಮೊಸಳೆಗಳು ಸಸ್ಯಾಹಾರಿಯೋ? ಮಾಂಸಾಹಾರಿಯೋ? ಎಂದು ನಾನು ಕೇಳುತ್ತಲೇ, ಅದೆಂತಹ ಪ್ರಶ್ನೆ! ಮೊಸಳೆಗಳೆಲ್ಲಾ ಮಾಂಸಾಹಾರಿಗಳಲ್ಲವೆ? ಎಂಬ ಕೊಂಚ ಕೋಪದ ಉದ್ಗಾರ ನೀವು ಹೇಳಿದಂತೆ ನನಗೆ ಕೇಳುತ್ತಿದೆ. ಆದರೆ ಸಂಶೋಧನೆ ಹೇಳುತ್ತಿರುವುದು 100% ಮಾಂಸಾಹಾರಿಗಳಾಗಿರುವ ಈಗಿನ ಮೊಸಳೆಗಳ ಪೂರ್ವಜರಲ್ಲಿ ಎಷ್ಟೋ ಸಸ್ಯಾಹಾರಿಗಳಿದ್ದವಂತೆ! ಮಿಶ್ರಾಹಾರಿಗಳೂ ಕೂಡ. ಇದು ತಿಳಿದು ಬಂದುದು ವಿಜ್ಞಾನಿಗಳಿಗೆ ದೊರಕಿರುವ ಮೊಸಳೆಗಳ ಪೂರ್ವಜರ ಹಲ್ಲಿನ ಪಳೆಯುಳಿಕೆಗಳ ಅಧ್ಯಯನ ಮಾಡಿದ ನಂತರ.

ಮೊಸಳೆಗಳು 6.6 ರಿಂದ 22.5 ಕೋಟಿ ವರ್ಷಗಳ ಕಾಲ ಅಂತರದಲ್ಲಿ ಕನಿಷ್ಟ 3 ಬಾರಿ ವಿಕಾಸಗೊಂಡಿವೆ ಎನ್ನುತ್ತಾರೆ ವಿಜ್ಞಾನಿಗಳು. ನಮಗೆಲ್ಲಾ ಸಾಮಾನ್ಯವಾಗಿ ತಿಳಿದಿರುವ ಹಾಗೆ ಮೊಸಳೆಗಳು ಎಲ್ಲವೂ ಮಾಂಸಾಹಾರಿಗಳೇ, ಜೊತೆಗೆ ಅವುಗಳ ಹಲ್ಲುಗಳ ಗಮನಿಸುವುದಾದರೆ ಹೆಚ್ಚು ಕಡಿಮೆ ಎಲ್ಲಾ ಹಲ್ಲುಗಳೂ ಚೂಪಾದ ಉದ್ದನೆಯ ಕೋನಾಕರದಲ್ಲಿರುತ್ತವೆ. ಇದನ್ನು ನೋಡಿಯೇ ನಾವು ಸಹಜವಾಗಿಯೇ ಊಹಿಸಬಹುದು, ಈ ಹಲ್ಲುಗಳು ಮಾಂಸವನ್ನು ಸೀಳಿ ಎಳೆಯಲು ಪೂರಕವಾಗಿವೆ ಎಂದು. ಆದರೆ ಈಗಿನ ಮೊಸಳೆಗಳ ಪೂರ್ವಜರ ಹಲ್ಲುಗಳಲ್ಲಿ ಹಲವಾರು ವಿಧಗಳಿದ್ದವು ಎನ್ನುತ್ತಾರೆ ಪಳೆಯುಳಿಕೆ ಶಾಸ್ತ್ರಜ್ಞ ಕೀಗನ್. ಇವರು ಹೀಗೆ ಹೇಳಲೂ ಸಹ ಕಾರಣವಿದೆ. ಕೀಗನ್ ಮತ್ತು ಅವರ ಸಹೋದ್ಯೋಗಿ ರಂಡಾಲ್ ರವರು ಈಗ ಅವಶೇಷವಾಗಿರುವ 16 ವಿವಿಧ ಬಗೆಯ ಮೊಸಳೆಗಳ 146 ಹಲ್ಲುಗಳ ಪಳೆಯುಳಿಕೆಯನ್ನು ಅಧ್ಯಯನ ಮಾಡಿ ಹೇಳುತ್ತಿದ್ದಾರೆ. ಇವರು ಹೇಳುವ ಹಾಗೆ ಮಾಂಸಾಹಾರಿಗಳ ಹಲ್ಲಿನ ರಚನೆಯು ಬಲು ಸಾಧಾರಣವಾಗಿದ್ದು, ಸಸ್ಯಾಹಾರಿ ಮತ್ತು ಮಿಶ್ರಾಹಾರಿಗಳ ಹಲ್ಲಿನ ಹಾಗೆ ಸಂಕೀರ್ಣವಾಗಿರುವುದಿಲ್ಲ ಎಂದು. ಏಕೆಂದರೆ ಸಸ್ಯಾಹಾರಿಗಳಿಗೆ ಹಲ್ಲುಗಳು ಹೆಚ್ಚಾಗಿ ಚಪ್ಪಟೆಯಾಗಿದ್ದು ಜೊತೆಗೆ ಹಲ್ಲಿನ ಮೇಲ್ಮೈ ಬೆಟ್ಟ ಗುಡ್ಡಗಳ ಹಾಗೆ ಹಳ್ಳ ಉಬ್ಬುಗಳಿರುತ್ತವೆ. ಈ ತರಹದ ಹಲ್ಲಿನ ರಚನೆ ಸಸ್ಯಾಹಾರಿ ಹಾಗೂ ಮಿಶ್ರಾಹಾರಿಗಳಿಗೆ ಸಸ್ಯಗಳ ಜಗಿಯಲು ಉಪಯೋಗಕರವಾಗಿರುತ್ತವೆ.

ಈ ವಿಜ್ಞಾನಿಗಳ ಆಶ್ಚರ್ಯಕ್ಕೆ ಅವರು ಗಮನಿಸಿದ ಆ ಹಲ್ಲುಗಳ ಪಳೆಯುಳಿಕೆಯಲ್ಲಿ ಆ ಮೊಸಳೆಗಳ ಹಲ್ಲುಗಳು ಈಗಿನ ಸಸ್ಯಾಹಾರಿಗಳ ಹಲ್ಲಿನ ಹಾಗೆ ಚಪ್ಪಟೆಯೊಂದಿಗೆ ಉಬ್ಬು ತಗ್ಗುಗಳಿದ್ದವು.




ಇದರಿಂದ ತಿಳಿದು ಬರುವ ವಿಷಯವನ್ನು ವಿವರಿಸಿ ಹೇಳಬೇಕಿಲ್ಲ ನೀವೆಲ್ಲಾ ಜಾಣರು ಅರ್ಥಮಾಡಿಕೊಂಡಿರುತ್ತೀರಿ. ಒಂದಂತೂ ನಿಜ, ಏನೆಂದರೆ ನಶಿಸಿ ಹೋಗಿರುವ ಮೊಸಳೆಗಳ ಆ ಪಳೆಯುಳಿಕೆ ಹಲ್ಲುಗಳಿಗೂ ಈಗಿನ ಮಾಂಸಾಹಾರಿ ಮೊಸಳೆಗಳ ಹಲ್ಲುಗಳಿಗೂ ಇರುವ ವ್ಯತ್ಯಾಸ ಅಜಗಜಾಂತರ. ಹಿಂದಿನ ಆ ಕಾಲದಲ್ಲಿ ಮೊಸಳೆಗಳು ನೆಲ, ಸಿಹಿ ನೀರು ಮತ್ತು ಉಪ್ಪು ನೀರಿನಲ್ಲೂ ಇದ್ದಿರಬಹುದು ಎಂದು ಈ ಸಂಶೋಧನೆಯಿಂದ ಅರಿಯಬಹುದಾಗಿದೆ.



© ವಿಜಯ್ ಕುಮಾರ್ ಡಿ. ಎಸ್.

ಅಷ್ಟೇ ಅಲ್ಲ, ಇದರಿಂದಾಗಿ ಆಗಿನ ವಾತಾವರಣದ ಊಹೆಯೂ ಹೆಚ್ಚೆಚ್ಚು ನಿಖರವಾಗಿ ಚಿತ್ರಿಸಬಹುದು ಎಂದೆನಿಸುತ್ತದೆ. ಈ ಸಸ್ಯ ತಿನ್ನುತ್ತಿದ್ದ ಮೊಸಳೆಗಳು ಬಹುಶಃ ಅಲ್ಲಿನ ವಾತಾವರಣ ಹಾಗೂ ಆಹಾರ ಪೈಪೋಟಿಯ ಸಲುವಾಗಿ ಹೀಗಿದ್ದಿರಬಹುದು ಎಂಬುದೂ ಸಹ ಒಂದು ವೈಜ್ಞಾನಿಕ ಊಹೆ.

ಈ ವಿಷಯಕ್ಕೆ ಸಂಬಂಧಪಟ್ಟಂತೆ ನಿಮ್ಮ ಊಹಾಪೋಹಗಳನ್ನು ನಮಗೆ ಬರೆದು ತಿಳಿಸಿ. ಸರಿಯಿದ್ದರೆ ನಾವು ಸುತ್ತಮುತ್ತಲವರಿಗೆ ಹಬ್ಬಿಸುತ್ತೇವೆ.

ಇ-ಮೇಲ್ ವಿಳಾಸ: kaanana.mag@gmail.com



- ಜೈಕುಮಾರ್ .ಆರ್

ಡಬ್ಲ್ಯೂ.ಸಿ.ಜಿ., ಬೆಂಗಳೂರು.

# ಹಸಿರ ಸಿರಿ




ನಾವೆಲ್ಲರು ಒಂದಲ್ಲ ಒಂದು ರೀತಿಯಲ್ಲಿ ಪ್ರಕೃತಿಯ ಹಾನಿಗೆ ಕಾರಣವಾಗಿರುತ್ತೇವೆ. ಹಾಗೆ ಅದರ ವ್ಯತಿರಿಕ್ತಪರಿಣಾಮದ ಫಲಾನುಭವಿಗಳೂ ಆಗಿರುತ್ತೇವೆ. ಹೌದು ಪ್ರಕೃತಿಯ ಮೇಲೆ ದೌರ್ಜನ್ಯವೆಸಗಿ, ಭೂಮಿಯನ್ನೇ ಅಳಿವಿನಂಚಿಗೆ ತಳ್ಳುತ್ತಿರುವ ಮಾನವನ ದುರಾಸೆಯು ಭೂಮಿಯ ಮೇಲಿನ ಸಕಲ ಜೀವರಾಶಿಗಳ ಉಳಿವಿಗೂ ಸಂಚಕಾರ ತಂದೊಡ್ಡಿದೆ. ಭೂಮಿಯ ಅಳಿವಿಗೆ ಕಾರಣವಾಗುತ್ತಿರುವ ನಾವೇ ಭೂಮಿಯ ಉಳಿವಿಗೆ ಕೈ ಜೋಡಿಸಬೇಕಾಗಿದೆ. ಜಾಗೃತರಾಗಿ ಜವಾಬ್ದಾರಿ ನಿರ್ವಹಿಸುವ ಕಾಲ ಬಂದಾಗಿದೆ. ಬರೀ ಮನುಜಕುಲದ ಬಗ್ಗೆ ಚಿಂತಿಸುತ್ತಿರುವ ನಾವು ಪ್ರಾಣಿ-ಪಕ್ಷಿಗಳ, ಗಿಡ-ಮರಗಳ ಉಳಿವಿನಲ್ಲೇ ನಮ್ಮ ಉಳಿವಿರುವುದು ಎಂಬ ಸತ್ಯ ಮನದಟ್ಟು ಮಾಡಿಕೊಳ್ಳಬೇಕಿದೆ. ಈ ನಿಟ್ಟಿನಲ್ಲಿ ದೂರದೃಷ್ಟಿ ಇರುವ ಜಗತ್ತಿನ ಹಲವಾರು ಜನರು ಪ್ರಕೃತಿಯ ಜೊತೆಗೆ ಜೀವಿಸುತ್ತಿದ್ದಾರೆ. ಪ್ರಕೃತಿಯ ರಕ್ಷಣೆಗೆ ಹೋರಾಡುತ್ತಿದ್ದಾರೆ. ಹಲವಾರು ಸಂಘ ಸಂಸ್ಥೆಗಳ ಮೂಲಕ ಪರಿಸರದ ಉಳಿವಿಗೆ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ. ಆದರೆ ಈ ಸಂಖ್ಯೆ ಹೆಚ್ಚಾಗಬೇಕಿದೆ. ಪ್ರತಿಯೊಬ್ಬ ಮನುಷ್ಯನೂ ಪ್ರಕೃತಿಯ ರಕ್ಷಣೆಯ ಹೊಣೆ ಹೊರಬೇಕಾದ ಅನಿವಾರ್ಯತೆ ಇದೆ.

WCG (Wildife Conservation Group) ಪ್ರಕೃತಿಯ ರಕ್ಷಣೆಯ ಹಾದಿಯಲ್ಲಿ ಸತತ ಹತ್ತು ವರ್ಷಗಳಿಂದ ನಡೆದು ಬರುತ್ತಿದ್ದು, ಈ ಹಾದಿಯಲ್ಲಿ ವಿದ್ಯಾರ್ಥಿಗಳ ಅದರಲ್ಲೂ ಕಾಡಂಚಿನಲ್ಲಿರುವ ಮಕ್ಕಳಲ್ಲಿ ಪರಿಸರದ ಪ್ರಾಮುಖ್ಯತೆ ಮತ್ತು ರಕ್ಷಣೆಯ ಬಗ್ಗೆ ಅರಿವನ್ನು ಮೂಡಿಸುವ ಕಾರ್ಯವನ್ನು ಮುಖ್ಯವಾಗಿಸಿಕೊಂಡು ಹಲವಾರು ಬಗೆಯ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದೆ. **'ಹಸಿರ ಸಿರಿ'** ಇದು ನಮ್ಮ ಸುತ್ತಲಿನ ಪರಿಸರದಲ್ಲಿ ಗಿಡಗಳನ್ನು

ನೆಟ್ಟು ಹಸಿರನ್ನು ಹೆಚ್ಚಿಸುವ ಯೋಜನೆ. ಈಗಿನ ಮಿತಿಮೀರಿ ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ, ನಗರೀಕರಣ, ರಸ್ತೆನಿರ್ಮಾಣ, ಹಾಗೂ ಹಲವು ಯೋಜನೆಗಳ ಹೆಸರಲ್ಲಿ ಮರಗಳ ಕಗ್ಗೊಲೆ ನಡೆಯುತ್ತಲೇ ಇದೆ. ಇದಕ್ಕೆ ಕಡಿವಾಣ ಹಾಕಿ ನಿಯಂತ್ರಿಸುವುದರಲ್ಲಿ ನಾವು ಸೋಲುತ್ತಿದ್ದೇವೆ. ಇಂತಹ ಪರಿಸ್ಥಿತಿಯಲ್ಲಿ ನಾವು ಸಂಪಾದಿಸಬೇಕಿರುವುದು ಹಸಿರನ್ನೇ ಹೊರತು ಹಣವನ್ನಲ್ಲ. ಇದೇ ಕಾರಣಕ್ಕಾಗಿ ನಮ್ಮ ಸುತ್ತಮುತ್ತಲು ಗಿಡಗಳನ್ನು ನೆಟ್ಟು ಬೆಳೆಸುವ ಉದ್ದೇಶ 'ಹಸಿರ ಸಿರಿ' ಯೋಜನೆಯದು.

ಮೊದಲಿಗೆ ಸರಿಸುಮಾರು 300 ಕ್ಕೂ ಹೆಚ್ಚು ಗಿಡಗಳನ್ನು ನೆಟ್ಟು ಪೋಷಿಸುವ ಗುರಿಯನ್ನಿಟ್ಟುಕೊಂಡು ಅಡಿಯಿಟ್ಟಿತು. 300 ಗಿಡನೆಡುವ ಕಾರ್ಯ ಸುಲಭವೇನಲ್ಲ ಇದಕ್ಕೆ ಪ್ರೊತ್ಸಾಹ, ಜನ ಸಹಾಯ ಮತ್ತೆ ಹಣದ ಸಹಾಯ ಅವಶ್ಯಕವಾಗಿತ್ತು. ಈ ಸಮಯಕ್ಕೆ ಪ್ರೊತ್ಸಾಹಿಸಿ ಬನ್ನೇರುಘಟ್ಟದ ವಲಯಾರಣ್ಯಾಧಿಕಾರಿಯಾದ ಶ್ರೀ ಗಣೇಶ್ ರವರು ಮತ್ತು ಹಣಕಾಸಿನ ನೆರವಾಗಿ ಶ್ರೀ ಸದಾನಂದ್ ತೆಗ್ಗಿ ಮತ್ತೆ ಅವರ ಸಹೃದಯಿ ಗೆಳೆಯರು ಬಂದದ್ದು ಬಲು



ಉಪಯೋಗವಾಯಿತು. 300 ಗಿಡಗಳನ್ನು ನೆಟ್ಟು ಕನಿಷ್ಠ 2 ವರ್ಷಗಳ ಕಾಲ ಪೋಷಿಸಲು ತಗಲುವ ಖರ್ಚು ವೆಚ್ಚಗಳನ್ನು ಅಂದಾಜಿಸಿ ತಿಳಿಸಿದ್ದೆವು. ಇದಕ್ಕೆ ಅವರು ಒಪ್ಪಿ ನೆರವಾದರು, ಅದರೊಂದಿಗೆ ಸಸಿ ನೆಡಲು ಶ್ರಮದಾನಕ್ಕೂ ಸಹ ಮುಂದಾಗಿದ್ದರು. ಇವರಲ್ಲದೆ ದಯಾನಂದ್ ಸಾಗರ ಇಂಜಿನಿಯರ್ ಕಾಲೇಜಿನ ವಿದ್ಯಾರ್ಥಿಗಳು ಸಹ ನೆರವಿನ ಹಸ್ತ ನೀಡಲು ಬಂದರು. ಕೆಲವು ಆಸಕ್ತರೂ ಸಹ ಸ್ವತಃ ಮುಂದೆ ಬಂದದ್ದು ವಿಶೇಷವಾಗಿ ಹಸಿರ ಸಿರಿ ಯೋಜನೆ ಸುಲಭವಾಗಲು ಕಾರಣವಾಯಿತು. ಹಸಿರ ಸಿರಿ ಗಿಡ ನೆಡುವ ಕಾರ್ಯಕ್ರಮವನ್ನು ದಿನಾಂಕ 21/09/2019 ಶನಿವಾರದಂದು ನಿಗದಿಪಡಿಸಿಕೊಂಡಿದ್ದರು. ಈ ದಿನಕ್ಕೆ ಬೇಕಾದ ಸಸಿಗಳನ್ನು WCG ಸದಸ್ಯರು ವಿವಿಧ ಪ್ರಭೇದದ ಕಾಡು ಜಾತಿಯ ದೊಡ್ಡ ಮರಗಳಾಗುವ ಸಸಿಗಳನ್ನು ಆರಿಸಿ ರಾಮನಗರದ ಸಸ್ಯಕ್ಷೇತ್ರದಿಂದ ತರಲಾಗಿತ್ತು. ತಂದಿದ್ದ ಸಸಿಗಳ ಸಂಖ್ಯೆಗನುಗುಣವಾಗಿ ಬೇಕಾದ ಗುಂಡಿಗಳನ್ನು ಜೆಸಿಬಿ ಮೂಲಕ ತೋಡಿಸಿ ವಾರದ ಮುಂಚೆಯೆ ಸಿದ್ಧಪಡಿಸಿಕೊಳ್ಳಲಾಗಿತ್ತು. ಇಷ್ಟೆಲ್ಲಾ ತಯಾರಿದ್ದರಿಂದಲೇ ಕಾರ್ಯಕ್ರಮದ ದಿನದಂದು ಆಗಮಿಸಿದ್ದ ಎಲ್ಲಾ ಸ್ವಯಂ ಸೇವಕರು, ಇಂಜಿನೇರಿಂಗ್ ವಿದ್ಯಾರ್ಥಿಗಳು, ಹಾಗು ನಮ್ಮ ಸದಸ್ಯರೂ ಸೇರಿ ಅರವತ್ತು ಜನಬಲದಿಂದ ಕಾರ್ಯಕ್ರಮ ಶುರುವಾಯಿತು. ಸಸಿ ನೆಡುವ ಮುಂಚೆ ಸಣ್ಣ ಪರಿಚಯ ಹಾಗೂ ಈ ಕಾರ್ಯಕ್ರಮದ ಉದ್ದೇಶವನ್ನು ನಾಗೇಶ್ ರವರು ತಿಳಿಸಿದರು. ಕೆಲವರ ಅನಿಸಿಕೆಗಳ ಆಲಿಸಿದ ನಂತರ ಅಶ್ವಥ್ ರವರ ಮಾರ್ಗದರ್ಶನದಂತೆ ಸಸಿ ನೆಡಲು ಬೆಳಿಗ್ಗೆ ಸುಮಾರು

9.30ಕ್ಕೆ ಪ್ರಾರಂಭಿಸಿದೆವು.

ಮಾನವ ಸರಪಳಿ ರಚಿಸಿ ಒಂದೆಡೆ ಇದ್ದ ಸಸಿಗಳನ್ನು ನೆಡುವಲ್ಲಿಗೆ ಸಾಗಿಸಲಾಯಿತು. ಗಿಡ ನೆಡುವ ಕೆಲಸ ಬಹು ಉತ್ಸುಕತೆಯಲ್ಲಿಯೇ ಶುರುವಾಗಿಬಿಟ್ಟಿತು. ಕೆಲಸ ಆರಂಭಿಸಿದ ಎರಡು ಘಂಟೆಗಳಲ್ಲೇ ದಣಿದೆವು. ತುಂಬಾ ಬಿಸಿಲಿದ್ದ ಪರಿಣಾಮ ಮತ್ತು ನಾವು ಹೊಸದಾಗಿ ತಂದಿದ್ದ ಚನೆಕೆಗಳಿಂದ ಮಣ್ಣು ಸುಲಭವಾಗಿ ತೆಗೆಯಲು ಆಗದೆ ತುಂಬಾ ಕಷ್ಟಪಡಬೇಕಾಯಿತು. ಊಟದ ಸಮಯಕ್ಕೆ ಎಲ್ಲಾ ಗಿಡಗಳನ್ನು ನೆಟ್ಟು ಪೂರೈಸಬೇಕೆಂದುಕೊಂಡಿದ್ದ ನಮಗೆ ಸಾಧ್ಯವಾಗಿದ್ದು ಶೇಕಡಾ 70 ಮಾತ್ರ. ಒಂದೆಡೆ ಬಿಸಿಲಿನ ತಾಪಕ್ಕೆ ದೇಹ ವೇಗವಾಗಿ ನಿರ್ಜಲೀಕರಣವಾಗಿ ನಿತ್ರಾಣವಾಗುತ್ತಿದ್ದರೆ, ಮತ್ತೊಂದೆಡೆ ಗಟ್ಟಿಯಾದ ಮಣ್ಣು ಚನೆಕೆಗೆ ಸಹಕರಿಸದೇ ಕಷ್ಟಪಡಬೇಕಾಯಿತು. ಎಂದೂ ಈ ತರಹದ ಕೆಲಸ ಮಾಡದವರು ಪಾಪ 2-3 ಗಿಡ ನೆಡುವಷ್ಟರಲ್ಲಿ ಸುಸ್ತಾಗಿ ಮರದ ನೆರಳಿನಾಶ್ರಯ ಪಡೆಯಲು ಓಡುತ್ತಿದ್ದರು. ತಮ್ಮ ಬೆವರಿನ ನೀರನ್ನೇ ಗಿಡಗಳಿಗೆ ಹಾಯಿಸುತ್ತಿದ್ದವರಿಗೆ ನೀರು ಮತ್ತು ಜ್ಯೂಸ್ ಗಳನ್ನು ಕೊಟ್ಟು, ಮತ್ತೆ ಪುನಶ್ಚೇತನಗೊಳಿಸುವ ಕಾರ್ಯ ನಡೆದೇ ಇತ್ತು. ಅಂತೂ ಊಟದ ಸಮಯಕ್ಕೆ ಸುಮಾರು 70 ಭಾಗದ ಕೆಲಸ ಮುಗಿದು ಊಟದ ವಿರಾಮಕ್ಕೆ ಹೊರಟೆವು. ಹಸಿದ ಹೊಟ್ಟೆಗೆ ಬಿಸಿ ಬಿಸಿ ಪಲಾವ್ ಮತ್ತು ಚಟ್ನಿ ಸರಿಯಾಗಿ ಬಾರಿಸಿ ಸ್ವಲ್ಪ ಕಾಲ ವಿಶ್ರಮಿಸಿದೆವು.



ಇದರ ನಡುವೆ ಮೋಡಗಳ ಸುಳಿವಿಲ್ಲದೆ ಬಿಸಿಲಿನ ತಾಪದಲ್ಲಿ ಯಾವುದೇ ಇಳಿಕೆ ಇರಲಿಲ್ಲ. ಕೆಲವರು ತಮ್ಮ ಅನಿವಾರ್ಯ ಕಾರ್ಯಗಳಿಗೆಂದು ಹಿಂದಿರುಗಿದರು. ಉಳಿದ ಸುಮಾರು 40 ಮಂದಿ ಊಟದ ನಂತರ ದೇಹ ಒಲ್ಲೆ ಎಂದರೂ ಹಿಡಿದ ಕಾರ್ಯ ಮುಗಿಸಲೇಬೇಕು ಎಂಬ ಛಲದ ಮನಸ್ಸಿನಿಂದ ಕೆಲಸಕ್ಕೆ ಹಿಂದಿರುಗಿದರು. ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಬಳಸಿ ಕೆಲಸ ಮಾಡುತ್ತಿದ್ದರೂ ಸೂರ್ಯನ ಮಧ್ಯಸ್ಥಿಕೆಯಿಂದ ಕೆಲಸ ಮಂದ ಗತಿಯಲ್ಲೇ ಸಾಗಿತು. ಅಂತೂ ಬಿಡದೇ ಎಲ್ಲಾ ಗುಂಡಿಗಳಲ್ಲೂ ಸಸಿಗಳನ್ನು ನೆಟ್ಟು ಪೂರ್ಣವಾಗಿಸಿದೆವು. ಗಿಡ ನೆಟ್ಟ ಮೇಲೆ ಜೀವದ ನೀರು ಹಾಯಿಸುವುದು ತುಂಬಾ ಸೂಕ್ತ. ಅದಕ್ಕೆಂದೇ ಒಂದು ಟ್ಯಾಂಕರ್ ನೀರು ಸಿದ್ಧವಾಗಿತ್ತು. ಎಲ್ಲರ ಒಗ್ಗಟ್ಟಿನ ಪರಿಣಾಮ ನೀರು ಹಾಯಿಸುವ ಕೆಲಸವೂ ಯಶಸ್ವಿಯಾಗಿ ಮುಗಿಯಿತು. ತುಂಬಾ ದಣಿದಿದ್ದ ಎಲ್ಲರಿಗೂ ಕೊನೆಯದಾಗಿ ಬೀಳ್ಕೊಡುವಾಗ ಸಂಜೆ ಐದಾಗಿತ್ತು. ಅಂತೂ ಆ ದಿನ ದಣಿದ ದೇಹಕ್ಕೆ ರಾತ್ರಿಯ ಒಳ್ಳೆ ನಿದ್ರೆ ಬಾರದಿರುವುದರಲ್ಲಿ ಸಂಶಯವಿರದಿದ್ದರೂ



ಮಾರನೆ ದಿನದ ಮೈ-ಕೈ ನೋವುಗಳ ರಾಗಗಳು ಅವರವರಿಗೇ ತಿಳಿದಿರುತ್ತದೆ.



ಅಂತೂ ಹಸಿರ ಸಿರಿ ಯೋಜನೆಯಲ್ಲಿ ಮೊದಲ ಹಂತದ ಕಾರ್ಯವು ಯಶಸ್ವಿಯಾಗಿದೆ. ಗಿಡಗಳಿಗೆ ಗೊಬ್ಬರ ಹಾಕಿ ಬೇಸಿಗೆಯಲ್ಲಿ ನೀರು ಒದಗಿಸಿ ಕೆಲವು ವರುಷಗಳವರೆಗೆ ಸಲಹುವ ಜವಾಬ್ದಾರಿ ನಮ್ಮದೇ ಆಗಿರುತ್ತದೆ. ಈ ಜವಾಬ್ದಾರಿಯಲ್ಲಿ ಭಾವಗಹಿಸಲು ಇಚ್ಛಿಸುವ ಎಲ್ಲರಿಗೂ ಸ್ವಾಗತವಿದೆ. ನಾವು ನೆಟ್ಟ ಗಿಡಗಳಲ್ಲಿ ಶೇಖಡಾ 50ರಷ್ಟಾದರೂ ಬೆಳೆದು ದೊಡ್ಡವಾದರೆ ಗುರಿ ಸಾಧಿಸಿದಂತೆಯೇ ಸರಿ. ಹಾಗೇ ಹಸಿರ ಸಿರಿ ವ್ಯಾಪ್ತಿಯು ವಿಸ್ತರಿಸುವ ಆಶಯವನ್ನು ಸಾಕಾರಗೊಳಿಸಲು ಪುಷ್ಟಿ ನೀಡಿದಂತಾಗುತ್ತದೆ. ಜೀವ ಸಂಕುಲದ ಉಳಿವಿನ ಪ್ರಶ್ನೆಗಳಿಗೆ ಇಂತಹ ಕಾರ್ಯಗಳೇ ಉತ್ತರವಾಗಿದೆ. ನಾವು ಇದರಲ್ಲಿ ಭಾಗಿಯಾಗಬೇಕಿದೆಯಷ್ಟೇ.





- **ರಾಕೇಶ್ ಆರ್. ವಿ.**

ಬೆಂಗಳೂರು

# ಪರಿಸರ ಸಂರಕ್ಷಣೆ

ಹಸಿರಲಿ ಉಸಿರಿದೆ ನೋಡಾ

ಕಡಿಯಬೇಡವೋ ಕಾಡು ಮೇಡಾ

ತಿಳಿದು ಬದುಕೋ ಹೇ ಮೂಢಾ

ಕುಸಿದಿದೆ ನೋಡು ಅಂತರ್ಜಲ

ಹೇ ಮನುಜ

ಇದು ನಿನ್ನದೇ ಕಾರ್ಯದ ಪ್ರತಿಫಲ

ಮಾಡದಿರು ಮನುಜ ಮರಗಳ ಮಾರಣಹೋಮ

ತಿಳಿದಿರಲಿ ಇದು ನೀನೆ

ಮಾಡಿಕೊಳ್ಳುವ ನಿನ್ನದೇ ಪರೋಕ್ಷ ನಿರ್ನಾಮ

ವಾತಾವರಣದಿ ಅಧಿಕಗೊಂಡಿದೆ ಉಷ್ಣತೆ

ಹೀಗೆಯೇ ಮುಂದುವರಿದರೆ

ಮುಂದಿನ ಪೀಳಿಗೆಗಿಲ್ಲ ಇಲ್ಲಿ ಬದುಕುವ ಸಾಧ್ಯತೆ

ವೃಕ್ಷಗಳ ಕಡಿದರೆ ನಾಶಗೊಂಡಂತೆ ಜನರು

ಹಸಿರಿದ್ದರೆ ನಿನ್ನ ಉಸಿರು

ಉಸಿರಿದ್ದರೆ ಮಾತ್ರ ನಿನ್ನ ಹೆಸರು

ಮೇಲೆಲ್ಲೂ ಇಲ್ಲ ಮನುಜ ಸ್ವರ್ಗವೂ

ಇಲ್ಲೇ ಇಹುದು

ಅದುವೇ ಈ ನಿಸರ್ಗವೂ

ಬೆಳೆಸೋಣ ಪ್ರತಿಯೊಬ್ಬರು ಒಂದೊಂದು ಗಿಡ

ಮಾಡೋಣ ಎಲ್ಲರೂ ಪ್ರಕೃತಿಯ ಸಧೃಡ

ಬದುಕೋಣ ಹಚ್ಚಹಸಿರಿನ ಪ್ರಕೃತಿಯ ಸಂಗ

- ಜನಾರ್ಧನ ಗೊರ್ಟೆ

# ಪ್ರಕೃತಿ ಬಿಂಬ



**ಹಳದಿ ಪೊದೆ ಕಪ್ಪೆ** **© ವಿಷ್ಣುಮೂರ್ತಿ**

ತನ್ನ ವಿಶಿಷ್ಟವಾದ ನೀಲಿ ಉಂಗುರದಂತಹ ಕಣ್ಣಿನಿಂದಾಗಿ ಈ ಹಿಂದೆ ಬ್ಲೂ-ಐಡ್ ಬುಷ್ ಫ್ರಾಗ್ ಎಂದು ಕರೆಯಲಾಗುತ್ತಿತ್ತು. ಹಳದಿ ಪೊದೆ ಕಪ್ಪೆಯು ಭಾರತದ ಪಶ್ಚಿಮ ಘಟ್ಟಗಳಲ್ಲಿ ಕಂಡುಬರುವುದರಿಂದ ಕರ್ನಾಟಕದಲ್ಲಿ ಈಗ ಕೂರ್ಗ್ ಹಳದಿ ಪೊದೆ ಕಪ್ಪೆಯೆಂದು ಚಿರಪರಿಚಿತವಾಗಿದೆ. "ರಾಕೊಫೊರಿಡೆ" ಕುಟುಂಬದ ಒಂದು ಪ್ರಭೇದವಾಗಿರುವ ಈ ಹಳದಿ ಪೊದೆ ಕಪ್ಪೆಯು, ಹಳದಿ ಮಿಶ್ರಿತ ಕಂದು ಬಣ್ಣದಿಂದ ಹಾಗು ತಿಳಿ-ಕಂದು ಬಣ್ಣದ ಗೆರೆಗಳಿಂದ ಕೂಡಿರುತ್ತದೆ. ನೀಲಿ ಉಂಗುರದಂತಹ ಕಣ್ಣುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಫಳ ಫಳ ಹೊಳೆಯುತ್ತಿರುತ್ತವೆ. ಸಾಮಾನ್ಯವಾಗಿ ನೆಲದಿಂದ ಒಂದು ಮೀಟರ್ ಎತ್ತರದಲ್ಲಿ ಎಲೆಗಳ ಮೇಲೆ ಹಾಗು ಕಾಂಡಗಳ ಮೇಲೆ ಕಂಡುಬರುತ್ತವೆ. ಇವು ಸಾಮಾನ್ಯವಾಗಿ ಪಾಳು ಬಿದ್ದಿರುವ ಮನೆ, ಕಾಡಿನ ಪಕ್ಕದಲ್ಲಿರುವ ಕಾಫಿ ತೋಟಗಳ ಬಳಿ ಕಾಣಸಿಗುತ್ತವೆ.



**ಮಲಬಾರ್ ಮರದ ನೆಲಗಪ್ಪೆ** **© ವಿಷ್ಣುಮೂರ್ತಿ**

ಮಲಬಾರ್ ಮರದ ನೆಲಗಪ್ಪೆಯು (ಪೆಡೋಸ್ಟಿಬೆಸ್ ಟುಬೆರ್ಕುಲುಸ್) ಗೋವಾದ ದಕ್ಷಿಣಕ್ಕೆ ಹಾಗೂ ಪಶ್ಚಿಮ ಘಟ್ಟದ ಉದ್ದಕ್ಕೂ ಈ ಹಿಂದೆ ಹೆಚ್ಚಾಗಿ ಕಂಡುಬರುತ್ತಿದ್ದವು, ಈಗ ಅಳಿವಿನಂಚಿನಲ್ಲಿರುವ ಈ ನೆಲಗಪ್ಪೆಯ ಪ್ರಭೇದ ನಶಿಸಿ ಹೋಗುವ ಭೀತಿಯಲ್ಲಿದೆ. ಇವು ಒದ್ದೆಯಾದ ಮರದ ಟೊಳ್ಳುಗಳು ಅಥವಾ ಹಸಿ ಎಲೆಗಳ ಕೆಳಗೆ ಕಂಡುಬರುತ್ತವೆ. ಗಂಡು ಮರಗಪ್ಪೆಗಳು ಮರದಿಂದ ಕರೆಮಾಡುತ್ತವೆ. ಹೆಣ್ಣು ನೆಲಗಪ್ಪೆಗಳು ಗಂಡಿಗಿಂತ ದೊಡ್ಡದಾಗಿರುತ್ತವೆ. ಇವುಗಳು ಸುಮಾರು 3.6 - 3.85 ಸೆಂ.ಮೀ ಉದ್ದಕ್ಕೆ ಬೆಳೆಯಬಲ್ಲವು. ಇದರ ಕರೆಯು "ಶಿರ್ರ್ ಶಿರ್ ಶಿರ್ ಶಿರ್" ಎಂಬಂತಿರುತ್ತದೆ. ಈ ಪ್ರಭೇದದ ನೆಲಗಪ್ಪೆಗಳು ಹೆಸರೇ ಹೇಳುವಂತೆ ಹೆಚ್ಚಾಗಿ ಮರಗಳ ಮೇಲೆ ಅದರಲ್ಲೂ ಪಶ್ಚಿಮ ಘಟ್ಟದ 200 ಅಡಿ ಎತ್ತರದಲ್ಲಿ ಹಾಗೂ ಆಗಾಗ್ಗೆ ತೊರೆಗಳ ಪಕ್ಕದಲ್ಲಿ ಕಂಡುಬರುತ್ತವೆ.



**ದೊಡ್ಡ ಹುರುಪೆಯ ಗುಳಿ ಮಂಡಲ** **© ವಿಷ್ಣುಮೂರ್ತಿ**

ದೊಡ್ಡ ಹುರುಪೆಯ ಗುಳಿ ಮಂಡಲವು (ಲಾರ್ಜ್ ಸ್ಕೇಲ್ಡ್ ಪಿಟ್ವೈಪರ್) ದಕ್ಷಿಣ ಭಾರತದ ಪಶ್ಚಿಮ ಘಟ್ಟಗಳಲ್ಲಿ ಕಂಡುಬರುತ್ತವೆ. ಇವುಗಳನ್ನು ವಿಷಯುಕ್ತ ಮಂಡಲ ಹಾವುಗಳ ಪ್ರಭೇದಕ್ಕೆ ಸೇರಿಸಲಾಗಿದೆ. ರಾತ್ರಿ ಹೊತ್ತು ಸಕ್ರಿಯವಾಗಿರುತ್ತವೆ ಹಾಗು ಸಾಮಾನ್ಯವಾಗಿ ಹಗಲು ನಿಷ್ಕ್ರಿಯವಾಗಿರುತ್ತವೆ, ಕೆಲವೊಮ್ಮೆ ಬಂಡೆಗಳಡಿ, ತೊರೆಗಳ ಬಳಿ ಹಾಗು ಮರಗಳ ಮೇಲೆ ತನ್ನ 2 ಅಡಿ ಉದ್ದದ ದೇಹದೊಂದಿಗೆ ಕಾಣಬಹುದು. ಮಳೆಗಾಲದಲ್ಲಿ ಇವು ಹೆಚ್ಚಾಗಿ ಕಂಡುಬರುತ್ತವೆ. ಈ ಪ್ರಭೇದದ ಹಾವುಗಳು ಆಹಾರವಾಗಿ ಕಪ್ಪೆ, ಹಲ್ಲಿ, ಪಕ್ಷಿ, ಹಾಗು ಇಲಿಗಳಂತಹ ಸಣ್ಣ

ಪ್ರಾಣಿಗಳನ್ನು ಸೇವಿಸುತ್ತವೆ. ಎಲ್ಲಾ ವಿಷಪೂರಿತ ಹಾವುಗಳಂತೆ ಈ ಹಾವಿನ ತಲೆಯು ಕೂಡ ತ್ರಿಭುಜಾಕೃತಿಯಲ್ಲಿರುವುದು ಕಂಡುಬರುತ್ತದೆ. ವರ್ಷದ ಇದೇ ತಿಂಗಳಲ್ಲಿ ಅಂದರೆ ಅಕ್ಟೋಬರ್ ನಲ್ಲಿ ಸಂತಾನೋತ್ಪತ್ತಿ ನಡೆಸುವ ಇವು 4-7 ಮೊಟ್ಟೆಗಳನ್ನಿಟ್ಟು ಮರಿಮಾಡುತ್ತವೆ.



**ಮಲೆ ಮಂಡಲ** **© ವಿಷ್ಣುಮೂರ್ತಿ**

ಮಲೆ ಮಂಡಲಗಳನ್ನು ನೋಡಲು ಉತ್ತಮ ಸ್ಥಳವೆಂದರೆ ಮಹಾರಾಷ್ಟ್ರದ ಅಂಬೋಲಿಯಲ್ಲಿ. ಇವು ಪಶ್ಚಿಮ ಘಟ್ಟಗಳಲ್ಲಿ ಹಾಗು ಭಾರತದ ನೈರುತ್ಯ ಭಾಗದಲ್ಲಿ ಕಾಣಲು ಸಿಗುವ ವಿಷಕಾರಿ ಹಾವುಗಳಲ್ಲಿ ಒಂದು. ಹೆಚ್ಚು ತೇವಾಂಶವಿರುವ ಕಾಡುಗಳನ್ನು ಇಷ್ಟ ಪಡುತ್ತವೆ ಮತ್ತು ಸಾಮಾನ್ಯವಾಗಿ ಚಹಾ, ಕಾಫಿ ಮತ್ತು ಏಲಕ್ಕಿ ತೋಟಗಳಲ್ಲಿ ಕಂಡುಬರುತ್ತವೆ. ನೆಲ ಹಾಗು ಮರದ ಮೇಲೆಯೂ ಕಾಣಸಿಗುವ ಇವು ಎಲ್ಲಾ ಮಂಡಲಗಳಂತೆ ಆಹಾರವಾಗಿ ಕಪ್ಪೆ,

ಹಲ್ಲಿ, ಇಲಿಗಳಂತಹ ಸಣ್ಣಪ್ರಾಣಿಗಳನ್ನು ಹಾಗು ಕೆಲವು ಬಾರಿ ಹಾವುಗಳನ್ನೇ ಭಕ್ಷಿಸುವುದುಂಟು. ತನ್ನ ಬಾಲವನ್ನು ಬಳಸಿ ಕೊಂಬೆಗಳನ್ನು ಹಿಡಿದಿಟ್ಟುಕೊಳ್ಳುತ್ತದೆ. ಇದೂ ಕೂಡ ತನ್ನ ತ್ರಿಭುಜಾಕೃತಿಯ ತಲೆಯಿಂದಾಗಿ ವಿಷಯುಕ್ತ ಹಾವೆಂದು ಸುಲಭಾಗಿ ಗುರುತಿಸಬಹುದು. ಹಳದಿ, ಹಸಿರು ಹಾಗು ಕಂದು ಬಣ್ಣಗಳನ್ನು ಒಳಗೊಂಡಂತೆ ಅನೇಕ ವಿಭಿನ್ನ ಬಣ್ಣದ ಮಾರ್ಫ್ ಗಳನ್ನು ಇದು ಒಳಗೊಂಡಿದೆ. ಮಾದರಿಯಂತೆ ಹಳದಿ ಮಾರ್ಫ್ ನ್ನು ಈ ಮೇಲೆ ತೋರಿಸಲಾಗಿದೆ.

**ಛಾಯಾಚಿತ್ರಗಳು : ವಿಷ್ಣುಮೂರ್ತಿ**

**ಲೇಖನ : ವಿವೇಕ್ ಜಿ. ಎಸ್.**

# ನೀವೂ ಕಾನನಕ್ಕೆ ಬರೆಯಬಹುದು




ಪ್ರತಿ ಜೀವಿಯು ಬದುಕಬೇಕಾದರೆ ಅದರದೇ ಆದ ನಿರ್ದಿಷ್ಟ ಆವಾಸಸ್ಥಾನ ಅಗತ್ಯವಿರುತ್ತದೆ. ಒಂದು ವಾಸಸ್ಥನವು ಮಣ್ಣು, ತೇವಾಂಶ, ತಾಪಮಾನ ಹಾಗೂ ಬೆಳಕಿನ ತೀಕ್ಷ್ಣತೆಯಂತಹ ಭೌತಿಕ ಅಂಶಗಳೊಡನೆ, ಆಹಾರದ ಅಭ್ಯತೆ, ಆಶ್ರಯ, ರಕ್ಷಣೆ ಮತ್ತು ಸಂತಾನೋತ್ಪತ್ತಿಗೆ ನೆರವಾಗುವಂತಹ ಜೈವಿಕ ಅಂಶಗಳಿಂದ ಮಾಡಲ್ಪಟ್ಟಿರುತ್ತದೆ. ವಾಸಸ್ಥಾನವು ಕೇವಲ ಭೌಗೋಳಿಕ ಪ್ರದೇಶವಾಗಿರಬೇಕು ಎಂದೇನಿಲ್ಲ. ಅದು ಒಂದು ಕಾಂಡದ ಒಳಭಾಗವಾಗಿರಬಹುದು, ಬಂಡೆಯ ಮೇಲಿನ ಪಾಚಿಯ ರಾಶಿಯಾಗಿರಬಹುದು, ಒಂದು ಪರಾವಲಂಬಿ ಜೀವಿಗೆ ಬೇರೆ ಜೀವಿಯ ಶರೀರವಾಗಿರಬಹುದು, ಅನ್ನನಾಳದಂತಹ ಆಶ್ರಯದಾತ ಜೀವಿಯ ಶರೀರದ ಭಾಗವಾಗಿರಬಹುದು. ವಾಸಸ್ಥಾನಗಳ ವೈವಿಧ್ಯತೆಯಲ್ಲಿ ದೃವಪ್ರದೇಶಗಳು, ಸಮಶೀತೋಷ್ಣ, ಉಷ್ಣವಲಯ ಪ್ರದೇಶಗಳು ಸೇರಿವೆ. ಸಸ್ಯವರ್ಗದ ಆವಾಸಗಳಾದ ಕಾಡು, ನಿತ್ಯಹರಿದ್ವರ್ಣ ಕಾಡು, ಹುಲ್ಲುಗಾವಲು, ಅರೆ ಶುಷ್ಕ ಅಥವಾ ಮರುಭೂಮಿಯಾಗಿರಬಹುದು. ನೀರಿನ ಆವಾಸಗಳಾದ ತೊರೆಗಳು, ನದಿಗಳು, ಸರೋವರಗಳು ಮತ್ತು ಸಮುದ್ರ ಪ್ರದೇಶಗಳು ಸೇರಿವೆ. ಈ ಭೂಮಿಯ ಮೇಲೆ ಜೀವಿಗಳ ಹಂಚಿಕೆಯ ಮೇಲೆ ವಾಸಸ್ಥಾನ ತುಂಬಾ ಪರಿಣಾಮ ಬೀರುತ್ತದೆ. ಆದ್ದರಿಂದ ವಾಸಸ್ಥಾನವು ಜೀವವೈಧ್ಯತೆಯನ್ನು ಕಾಪಾಡುವುದಕ್ಕೆ ಅತಿ ಮುಖ್ಯವಾದ ಅಂಶವಾಗಿದೆ.

ಯಾವಾಗ ಜೀವಿ ಬದುಕುವ ವಾಸಸ್ಥಾನದಲ್ಲಿ ಏರುಪೇರಾಗುತ್ತದೋ, ಆಗ ಆ ವಾಸಸ್ಥಾನದಲ್ಲಿ ಕಂಡು ಬರುವ ಜೀವಿಗಳು ನಶಿಸಿಹೋಗುತ್ತವೆ. ಈಗಾಗಲೇ, ನಾವು ಅಭಿವೃದ್ಧಿಯ ಕಡೆ ಮುಖಮಾಡಿ ಎಷ್ಟೊಂದು ವನ್ಯಜೀವಿಗಳ ಆವಾಸಗಳನ್ನು ಕುರುಹು ಇಲ್ಲದೆ ನೆಲಸಮ ಮಾಡಿದ್ದೇವೆ. ಇದರಿಂದ ಎಷ್ಟೊಂದು ಜೀವಿಗಳು ನಶಿಸಿಹೋಗಿದ್ದಾವೆ ಹಾಗೂ ಕೆಲವು ಅಳಿವಿನಂಚಿನ ಪಟ್ಟಿಯಲ್ಲಿ ಸೇರಿವೆ. ಇತ್ತೀಚೆಗಷ್ಟೆ, ದಕ್ಷಿಣ ಪೆಸಿಫಿಕ್ ನ ಫಿಜಿ ದ್ವೀಪದಲ್ಲಿ ಆಸ್ಟ್ರೇಲಿಯಾದ ಫ್ಲಿಂಡರ್ಸ್ ಯೂನಿವರ್ಸಿಟಿಯಲ್ಲಿ ಪಿಎಚ್ ಡಿ ಅಧ್ಯಯನ ನಡೆಸುತ್ತಿರುವ ಜೇಮ್ಸ್ ಡೋರೆಯಾವರ ಸಂಶೋಧನೆಯಲ್ಲಿ ಕಂಡು ಹಿಡಿದ ಹೊಸ ಪ್ರಭೇದದ ಬಣ್ಣದ ಜೇನುನೊಣಗಳು ಪತ್ತೆಯಾಗಿದ್ದು, ಆ ಜೇನು ನೊಣಗಳು ಹವಾಮಾನ ಬದಲಾವಣೆ ಮತ್ತು ಅದರ ಆವಾಸಗಳ ನಾಶದಿಂದ ಅವು ಈಗ ಅಳಿವಿನಂಚಿನಲ್ಲಿವೆ ಎಂದು ತಿಳಿದು ಬಂದಿದೆ. ಆಗಾಗಿ, ಈ ಪರಿಸರದಲ್ಲಿ ಎಲ್ಲಾ ಜೀವಿಗಳು ಅತಿ ಮುಖ್ಯವಾದ ಪಾತ್ರ ನಿರ್ವಹಿಸುತ್ತವೆ. ಯಾವುದೇ ಜೀವಿಯ ಪಾತ್ರವು ಕಳಚಿ ಹೋದರು. ಪರಿಸರದಲ್ಲಿ ನಡೆಯುತ್ತಿರುವ ಚಕ್ರಗಳು ಅಲ್ಲೋಲ ಕಲ್ಲೋಲವಾಗುತ್ತದೆ. ಆದ್ದರಿಂದ ಜೀವಿಗಳ ಹಾಗೂ ವಾಸಸ್ಥಾನಗಳ

ಮಹತ್ವವನ್ನು ತಿಳಿಸಲು ಅಕ್ಟೋಬರ್ ತಿಂಗಳ 4ನೇ ತಾರೀಖಿನಂದು "World Animal Day" ಹಾಗೂ 7ನೇ ತಾರೀಖಿನಂದು "World Habitat Day" ಎಂದು ಆಚರಿಸಲಾಗುತ್ತದೆ, ಇವುಗಳ ಸಂರಕ್ಷಣೆಯ ಹಾದಿಯಲ್ಲಿ ನಾವು ಮತ್ತು ನೀವೂ ಏನಾದರು ಮಾಡಬಹುದೆ? ಒಮ್ಮೆ ಯೋಚಿಸಿ. ಕೊನೆ ಪಕ್ಷ ಮಕ್ಕಳಲ್ಲಿಯಾದರೂ ಅರಿವು ಮೂಡಿಸಲು, ಇವುಗಳ ಉಳಿವಿಗಾಗಿ ಕಾನನಕ್ಕೆ ನಿಮ್ಮ ಬರಹಗಳನ್ನು ಸಹ ಮಾಡಬಹುದಲ್ಲವೇ... ಈ ಕುರಿತು ನವೆಂಬರ್ ತಿಂಗಳ ಸಂಚಿಕೆಗಾಗಿ ಜೀವ ವೈವಿಧ್ಯತೆ ಕುರಿತ, ಕಾಡು, ಕಾಡಿನ ಕತೆಗಳು, ಜೀವ ವಿಜ್ಞಾನ, ವನ್ಯ ವಿಜ್ಞಾನ, ಕೀಟಲೋಕ, ಕೃಷಿ, ವನ್ಯಜೀವಿ ಛಾಯಚಿತ್ರಗಳು, ಕವನ (ಪರಿಸರಕ್ಕೆ ಸಂಬಂಧಿಸಿದ), ವರ್ಣಚಿತ್ರಗಳು ಮತ್ತು ಪ್ರವಾಸ ಕತೆಗಳು, ಪರಿಸರಕ್ಕೆ ಸಂಬಂಧ ಪಟ್ಟ ಎಲ್ಲಾ ಲೇಖನಗಳನ್ನು ಆಹ್ವಾನಿಸಲಾಗಿದೆ. ಇ-ಮೇಲ್ ಅಥವಾ ಪೋಸ್ಟ್ ಮೂಲಕ ಕಳಿಸಬಹುದು.

**ಈ ಕೆಳಗಿನ ಇ-ವಿಳಾಸಕ್ಕೆ ಲೇಖನಗಳನ್ನು ಇದೆ** ಅಕ್ಟೋಬರ್ **ತಿಂಗಳ ದಿನಾಂಕ 15 ರೊಳಗೆ ನಿಮ್ಮ ಹೆಸರು ಮತ್ತು ವಿಳಾಸದೊಂದಿಗೆ**

kaanana.mag@gmail.com

ಅಥವಾ

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.

**- ಅಶ್ವಿನಿ ಎಸ್.**

**ಬೆಂಗಳೂರು.**